# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **163 (189)**
2. ಸದಸ್ಯರ ಹೆಸರು : ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು)
3. ಉತ್ತರಿಸುವ ದಿನಾಂಕ : **03.03.2020**
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಧಾರ್ಮಿಕ ಕೈಗಾರಿಕೆ ಎಂದರೇನು; ರಾಜ್ಯದಲ್ಲಿ ಇದುವರೆವಿಗೆ ಧಾರ್ಮಿಕ ಕೈಗಾರಿಕೆಗೆಂದು ಎಷ್ಟು ಎಕರೆ ಭೂಮಿಯನ್ನು ಕೆ.ಐ.ಡಿ.ಬಿ. ಮುಖಾಂತರ ಉದ್ಯಮಿಗಳಿಗೆ ಗುತ್ತಿಗೆ / ಮಾರಾಟದ ಮೂಲಕ ವಿತರಿಸಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು) | ಧಾರ್ಮಿಕ ಕೈಗಾರಿಕೆ ಎಂಬುದು ಇರುವುದಿಲ್ಲ.<br><br>ಧಾರ್ಮಿಕ ಕೈಗಾರಿಕೆ ಎಂಬ ಯೋಜನೆಗೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳ ವತಿಯಿಂದ ಜಮೀನು ಹಂಚಿಕೆ ಮಾಡಿರುವುದಿಲ್ಲ. |
| ಆ. | ಯಾವ ಉದ್ದೇಶಕ್ಕೆ ಕೆಐಡಿಬಿ ಮುಖಾಂತರ ಉದ್ಯಮಿಗಳಿಗೆ ಗುತ್ತಿಗೆ/ಮಾರಾಟದ ಮೂಲಕ ವಿತರಿಸಲಾಗಿದೆಯೋ ಆ ಉದ್ದೇಶಕ್ಕೆ ಬಳಸಿಕೊಳ್ಳದ ಎಷ್ಟು ಎಕರೆ ಭೂಮಿಯನ್ನು ಕೆಐಎಡಿಬಿ ಹಿಂದಕ್ಕೆ ಪಡೆದುಕೊಂಡಿದೆ: (ಜಿಲ್ಲಾವಾರು ಮಾಹಿತಿ ನೀಡುವುದು) | ಉದ್ಭವಿಸುವುದಿಲ್ಲ. |

| | | |
|---|---|---|
| ಇ. | ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ದೊಡ್ಡಕಲ್ಲಸಂದ್ರ ಗ್ರಾಮದ ಸರ್ವೇ ನಂ. 55/1(ಪಿ), 55/2(ಪಿ), 56, 57, 58, 59(ಪಿ) ಮತ್ತು 60(ಪಿ) ಯಲ್ಲಿನ 24 ಎಕರೆ ಜಾಗವನ್ನು ಯಾವ ಉದ್ದೇಶಕ್ಕಾಗಿ ಯಾರಿಗೆ ಕೆ.ಐ.ಡಿ.ಬಿ. ಮುಖಾಂತರ ವಿತರಿಸಲಾಗಿತ್ತು; | ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ದೊಡ್ಡಕಲ್ಲಸಂದ್ರ ಗ್ರಾಮದ ಸರ್ವೆ ನಂ: 55/1(ಪಿ), 56, 57, 58, 59(ಪಿ) ಮತ್ತು 60(ಪಿ) ರಲ್ಲಿನ ಜಮೀನನ್ನು ಕೆ.ಐ.ಎ.ಡಿ.ಬಿ.ಯು ಹಂಚಿಕೆ ಮಾಡಿರುವ ವಿವರ ಈ ಕೆಳಕಂಡಂತಿದೆ:-<br>1. ಶ್ರೀಶೈಲಾ ಕೋ-ಆಪರೇಟಿವ್ ಇಂಡಸ್ಟ್ರೀಯಲ್ ಎಸ್ಟೇಟ್ ಇವರಿಗೆ ಬೆಂಗಳೂರು ನಗರ ಜಿಲ್ಲೆ, ಉತ್ತರಹಳ್ಳಿ ಹೋಬಳಿ, ದೊಡ್ಡಕಲ್ಲಸಂದ್ರ ಗ್ರಾಮದ ಸರ್ವೆ ನಂ: 55/1ಪಿ. 55/2ಪಿ. 55/3ಪಿ, 55/5, 56, 57, 58, 59 & 60 ರಲ್ಲಿನ 41-06 ಎಕರೆ ಜಮೀನನ್ನು ದಿನಾಂಕ 23.08.1972ರಂದು ಏಕ ಘಟಕ ಸಂಕೀರ್ಣದಡಿ ಕೈಗಾರಿಕಾ ಬಡಾವಣೆ ನಿರ್ಮಿಸಲು ಮತ್ತು ಗಡಿಯಾರದ ಬಿಡಿಭಾಗಗಳನ್ನು ತಯಾರಿಸಿ ರಫ್ತು ಮಾಡುವ ಉದ್ದೇಶಕ್ಕೆ ಹಂಚಿಕೆ ಮಾಡಲಾಗಿದೆ.<br>2. ತದನಂತರ, ಶ್ರೀಶೈಲಾ ಕೋ-ಆಪರೇಟಿವ್ ಇಂಡಸ್ಟ್ರೀಯಲ್ ಎಸ್ಟೇಟ್ ಇವರ ಕೋರಿಕೆಯ ಮೇರೆಗೆ 41-06 ಎಕರೆ ಜಮೀನಿನ ಪೈಕಿ 27-06 ಎಕರೆ ಜಮೀನನ್ನು ಹಿಂಪಡೆದು ಸೊಸೈಟಿಯ 18 ಅಂಗ ಸಂಸ್ಥೆಗಳಿಗೆ ವಿವಿಧ ಉದ್ದೇಶಗಳಿಗೆ ಹಂಚಿಕೆ ಮಾಡಲಾಗಿದೆ.<br>3. ಶ್ರೀಶೈಲಾ ಕೋ-ಆಪರೇಟಿವ್ ಇಂಡಸ್ಟ್ರೀಯಲ್ ಎಸ್ಟೇಟ್ ಇವರ ಬಳಿ ಉಳಿದ 13-08 ಎಕರೆ ಜಮೀನಿನಲ್ಲಿ ಸೊಸೈಟಿಯವರು ಕೆ.ಐ.ಎ.ಡಿ.ಬಿ.ಯ ನಿಯಮಾನುಸಾರ ಯೋಜನೆಯನ್ನು ಅನುಷ್ಠಾನಗೊಳಿಸಿ ಶೇಕಡಾ 50.05ರಷ್ಟು ಜಮೀನನ್ನು ಉಪಯೋಗಿಸಿಕೊಂಡ ಹಿನ್ನೆಲೆಯಲ್ಲಿ, ಕೆ.ಐ.ಎ.ಡಿ.ಬಿ.ಯು ಬಾಕಿ ರೂ.60,73,682/-ಗಳನ್ನು ಪಾವತಿಸಿಕೊಂಡು ದಿನಾಂಕ 22.06.2004ರಂದು ಶುದ್ಧ ಕ್ರಯಪತ್ರವನ್ನು ನೆರವೇರಿಸಲಾಗಿದೆ.<br>4. ಉಳಿದ 27-06 ಎಕರೆ ಜಮೀನನ್ನು ಮೆ॥ ಕೆ.ಎಸ್.ಎಫ್.ಸಿ. ರವರು ಎಸ್.ಎಫ್.ಸಿ ಕಾಯ್ದೆ ಕಲಂ 29ರಡಿ ಕಬ್ಜೆ ಪಡೆದು, ಮಾನ್ಯ ಉಚ್ಚ ನ್ಯಾಯಾಲಯದ ನಿರ್ದೇಶನದಂತೆ, ದಿನಾಂಕ 01.12.2003ರಂದು ಸಾರ್ವಜನಿಕ ಹರಾಜು ನಡೆಸಿದ್ದು, ಮೆ॥ ಇಸ್ಕಾನ್ ಚಾರಿಟೀಸ್ ಇವರು ಸದರಿ ಹರಾಜಿನಲ್ಲಿ ಭಾಗವಹಿಸಿ ಸದರಿ ಜಮೀನನ್ನು ಖರೀದಿಸಿರುತ್ತಾರೆ.<br>5. ಕೆ.ಐ.ಎ.ಡಿ.ಬಿ.ಯ ಹಂಚಿಕೆ ನಿಯಮದಂತೆ, ಮೆ॥ ಇಸ್ಕಾನ್ ಚಾರೀಟೀಸ್ ಇವರಿಗೆ ಸದರಿ ಜಮೀನಿನ ಗುತ್ತಿಗೆ ಹಕ್ಕನ್ನು ವರ್ಗಾವಣೆ ಮಾಡುವಾಗ 2 ವರ್ಷಗಳ ಅವಧಿಗೆ ಗುತ್ತಿಗೆ ಮತ್ತು ಮಾರಾಟ ಕರಾರು ಪತ್ರ ನೆರವೇರಿಸಿ, 1 ವರ್ಷದಲ್ಲಿ ಯೋಜನೆ |

| | | |
|---|---|---|
| | | ಅನುಷ್ಠಾನಗೊಳಿಸುವ ಷರತ್ತಿಗೊಳಪಟ್ಟು ವರ್ಗಾವಣೆ ಮಾಡುವುದಾಗಿ ತಿಳಿಸಲಾಗಿದೆ.<br>6. ಮೆ॥ ಇಸ್ಕಾನ್ ಚಾರಿಟೀಸ್ ಇವರು ದಿನಾಂಕ 04.06.2004ರ ಪತ್ರದಲ್ಲಿ ಖರೀದಿಸಲಾದ 27-06 ಎಕರೆ ಜಮೀನಿನಲ್ಲಿ ಈಗಾಗಲೇ ತಾವು India Heritage Theme Park ಅನುಷ್ಠಾನಗೊಳಿಸಿದ್ದು, ಅಕ್ಷಯ ಪಾತ್ರೆ Mid-day Meal Programme ಗೆ Godown, Vehicle Parkingಗಾಗಿ ಬಳಸಲಾಗಿದೆ ಎಂದು ತಿಳಿಸಿ, ದಿನಾಂಕ 29.01.2004ರ SLSWA ಸಭೆಯಲ್ಲಿ ತಮ್ಮ Theme Parkಗೆ Tourism Project ಎಂದು ಅನುಮೋದನೆಯಾಗಿದೆ ಎಂಬ ಕಾರಣಗಳನ್ನು ನೀಡಿ ತಮಗೆ ನೇರವಾಗಿ ಶುದ್ಧ ಕ್ರಯಪತ್ರವನ್ನು ನೆರವೇರಿಸಿಕೊಡುವಂತೆ ಕೋರಿದ್ದರು.<br>7. ಸದರಿಯವರ ಮನವಿಯನ್ನು ಈ ಅಂಶಗಳೊಂದಿಗೆ ವಿಷಯವನ್ನು ದಿನಾಂಕ 18.08.2004ರಂದು ನಡೆದ 259ನೇ ಮಂಡಳಿ ಸಭೆಯಲ್ಲಿ ಮಂಡಿಸಲಾಗಿದ್ದು, ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ, ಬೆಂಗಳೂರು ನಗರ ಜಿಲ್ಲೆ, ಉತ್ತರಹಳ್ಳಿ ಹೋಬಳಿ, ದೊಡ್ಡಕಲ್ಲಸಂದ್ರ ಗ್ರಾಮದ ಸರ್ವೆ ನಂ: 55/1ಪಿ, 55/2ಪಿ, 55/3ಪಿ, 56-ಪಿ, 57-ಪಿ, 58, 59-ಪಿ & 60-ಪಿ ಗಳಲ್ಲಿನ 27-02 ಎಕರೆ ಜಮೀನಿಗೆ ಮೆ॥ ಇಸ್ಕಾನ್ ಚಾರಿಟೀಸ್ ಇವರಿಗೆ ಶುದ್ಧ ಕ್ರಯಪತ್ರ ನೆರವೇರಿಸಿಕೊಡಲು ನಿರ್ಣಯಿಸಲಾಗಿದೆ.<br>8. ಮಂಡಳಿ ಸಭೆಯ ನಿರ್ಣಯದಂತೆ, ಮೆ॥ ಇಸ್ಕಾನ್ ಚಾರಿಟೀಸ್ ಇವರಿಂದ ಕೆ.ಐ.ಎ.ಡಿ.ಬಿ.ಯ ಬಾಕಿ ರೂ.1,22,90,098/- ಗಳನ್ನು ಪಾವತಿಸಿಕೊಂಡು ದಿನಾಂಕ 06.10.2004ರಂದು 27-14 ಎಕರೆ (ಹೆಚ್ಚುವರಿ 12 ಗುಂಟೆ ಜಮೀನು ಸೇರಿ) ಜಮೀನಿನ ಶುದ್ಧ ಕ್ರಯ ಪತ್ರವನ್ನು ನೆರವೇರಿಸಲಾಗಿದೆ. |
| ಈ. | ಪ್ರಸ್ತುತ ಆ ಜಾಗದಲ್ಲಿ ಯಾವ ಕೈಗಾರಿಕೆ ಪ್ರಾರಂಭಗೊಂಡಿದೆ; ಇದರಿಂದ ಎಷ್ಟು ಕನ್ನಡಿಗರಿಗೆ ಉದ್ಯೋಗ ದೊರೆತಿದೆ; ಈ ಕೈಗಾರಿಕೆಯ ಉತ್ಪನ್ನಗಳಾವುವು; | ಪ್ರಸ್ತುತ ಸದರಿ ಜಮೀನಿನಲ್ಲಿ, ಮೆ॥ ಇಸ್ಕಾನ್ ಚಾರಿಟೀಸ್‌ರವರು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ change of land use ಪಡೆದು ಮೆ॥ ಮಂತ್ರಿ ಸೆರೆನಿಟಿ ರವರೊಂದಿಗೆ ಜಂಟಿ ಸಹಭಾಗಿತ್ವದಲ್ಲಿ ವಸತಿ ಸಮುಚ್ಚಯವನ್ನು ನಿರ್ಮಿಸಿರುತ್ತಾರೆ. |

| | | |
|---|---|---|
| ಉ. | ಸದರಿ ಜಾಗವನ್ನು ಯಾವ ಉದ್ದೇಶಕ್ಕಾಗಿ ನೀಡಲಾಗಿತ್ತೋ ಆ ಉದ್ದೇಶಕ್ಕೆ ಬಳಸಿಕೊಳ್ಳದಿದ್ದಲ್ಲಿ, ಸದರಿ ಜಾಗವನ್ನು ಕೆ.ಐ.ಡಿ.ಬಿ. ಹಿಂದಕ್ಕೆ ಪಡೆದುಕೊಳ್ಳಲು ಯಾವ ಕ್ರಮ ಕೈಗೊಂಡಿದೆ; ಈ ಕುರಿತು ಯಾವಾಗ ನೋಟೀಸ್ ನೀಡಲಾಗಿದೆ? | ಬೆಂಗಳೂರು ನಗರ ಜಿಲ್ಲೆ, ಉತ್ತರಹಳ್ಳಿ ಹೋಬಳಿ, ದೊಡ್ಡಕಲ್ಲಸಂದ್ರ ಗ್ರಾಮದ ಸರ್ವೆ ನಂ: 55/1ಪಿ, 55/2ಪಿ, 55/3ಪಿ, 56-ಪಿ, 57-ಪಿ, 58, 59-ಪಿ & 60-ಪಿ ರಲ್ಲಿನ 27-02 ಎಕರೆ ಜಮೀನಿಗೆ ಮೆ॥ ಇಸ್ಕಾನ್ ಚಾರೀಟೀಸ್ ಇವರಿಗೆ ಶುದ್ಧ ಕ್ರಯ ಪತ್ರ ನೀಡಲಾಗಿದೆ.<br><br>ನಂತರ, ಮೆ॥ ಇಸ್ಕಾನ್ ಚಾರೀಟೀಸ್ ರವರ ಕೋರಿಕೆ ಮೇರೆಗೆ change of land useಗಾಗಿ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಗಳಾದ ಬಿ.ಡಿ.ಎ/ ಬಿ.ಎಂ.ಆರ್.ಡಿ.ಎ./ ಸರ್ಕಾರ/ ಹೆಚ್.ಯು.ಡಿ ರವರನ್ನು ಸಂಪರ್ಕಿಸಲು ದಿನಾಂಕ: 25.10.2008ರಂದು ಪತ್ರ ನೀಡಲಾಗಿದೆ.<br><br>ನಂತರ, ಶ್ರೀ ಕೆ. ಪುರುಷೋತ್ತಮ ಇವರು ದಿನಾಂಕ: 10.03.2014ರಂದು ನೀಡಿದ ದೂರಿನ ಮೇಲೆ, ಪರಿಶೀಲಿಸಿ, ಮೆ॥ ಇಸ್ಕಾನ್ ಚಾರೀಟೀಸ್ ರವರಿಗೆ ದಿನಾಂಕ: 13.06.2014ರಂದು ಸದರಿ ಜಮೀನಿನಲ್ಲಿ ಅಪಾರ್ಟ್‌ಮೆಂಟ್ಸ್ ನಿರ್ಮಿಸುತ್ತಿದ್ದ ಹಿನ್ನೆಲೆಯಲ್ಲಿ, ಶುದ್ಧ ಕ್ರಯದ ನಿಬಂಧನೆಗಳನ್ನು ಉಲ್ಲಂಘಿಸಿರುವುದಕ್ಕೆ ಕಾರಣ ಕೇಳಿ ನೋಟಿಸ್ ನೀಡಲಾಗಿತ್ತು.<br><br>ಮೆ॥ ಇಸ್ಕಾನ್ ಚಾರೀಟೀಸ್ ರವರು ದಿನಾಂಕ: 19.06.2014ರ ತಮ್ಮ ಪತ್ರದಲ್ಲಿ, ಸಿ.ಡಿ.ಪಿ 2015ರನ್ವಯ ಸದರಿ ಜಮೀನು ಬಹುತೇಕ ವಸತಿ ವಲಯವಾಗಿದ್ದು, ಅದರಂತೆ, ಬಿ.ಡಿ.ಎ. ರವರಿಂದ change of land use ಪಡೆಯಲಾಗಿದೆ ಎಂದು ತಿಳಿಸಿದ್ದರಿಂದ, ದಿನಾಂಕ: 26.08.2014ರ ಕಾರಣ ಕೇಳುವ ನೋಟಿಸನ್ನು ಹಿಂಪಡೆಯಲಾಗಿದೆ. |

ಸಂಖ್ಯೆ: ಸಿಐ **25** ಐಎಪಿ(ಇ) **2020**

(ಜಗದೀಶ್ ಶೆಟ್ಟರ್)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ
ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು